# ಕರ್ನಾಟಕ ವಿಧಾನಸಭೆ

(15ನೇ ವಿಧಾನಸಭೆ)
ಹತ್ತನೇ ಅಧಿವೇಶನ

## ಕಾರ್ಯಕಲಾಪಗಳ ಪಟ್ಟಿ

ಗುರುವಾರ, ದಿನಾಂಕ 23ನೇ ಸೆಪ್ಟೆಂಬರ್, 2021
(ಸಮಯ: ಬೆಳಿಗ್ಗೆ 10.30 ಗಂಟೆಗೆ)

----

## 1. ಪ್ರಶ್ನೋತ್ತರ

ಅ) ಸದನದಲ್ಲಿ ಉತ್ತರಿಸುವ ಪ್ರಶ್ನೆಗಳು : ಒಂಭತ್ತನೇ ಪಟ್ಟಿ

ಆ) ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆಗಳು : ಒಂಭತ್ತನೇ ಪಟ್ಟಿ

## 2. ಕಾರ್ಯದರ್ಶಿಯವರ ವರದಿ

**ಕಾರ್ಯದರ್ಶಿಯವರು:–**

ಮಾನ್ಯ ರಾಜ್ಯಪಾಲರಿಂದ ಒಪ್ಪಿಗೆ ಪಡೆದ ಕರ್ನಾಟಕ ಗ್ರಾಮ ಸ್ವರಾಜ್ ಮತ್ತು ಪಂಚಾಯತ್ ರಾಜ್ (ತಿದ್ದುಪಡಿ) ವಿಧೇಯಕವನ್ನು ಸಭೆಯ ಮುಂದೆ ಮಂಡಿಸುವುದು.

## 3. ಸಭೆಯ ಮುಂದಿಡಲಾಗುವ ಕಾಗದ ಪತ್ರಗಳು

ಮಾನ್ಯ ಸದಸ್ಯರುಗಳಿಗೆ ಪ್ರತ್ಯೇಕವಾಗಿ ಕಳುಹಿಸಲಾಗಿರುವ ಮೂರನೇ ಪಟ್ಟಿಯ ರೀತ್ಯಾ.

## 4. ವಿತ್ತೀಯ ಕಾರ್ಯಕಲಾಪಗಳು

2021–22ನೇ ಸಾಲಿನ ಪೂರಕ ಅಂದಾಜುಗಳ ಮೊದಲನೇ ಕಂತಿನ ಬೇಡಿಕೆಗಳ ಮೇಲೆ ಚರ್ಚೆ, ಸರ್ಕಾರದ ಉತ್ತರ ಹಾಗೂ ಮತಕ್ಕೆ ಹಾಕುವುದು.

**.. 2/ ..**

## 5. ನಿಯಮ 69ರ ಮೇರೆಗೆ ಸಾರ್ವಜನಿಕ ಮಹತ್ವದ ಜರೂರು ವಿಷಯಗಳ ಬಗ್ಗೆ ಅಲ್ಪ ಕಾಲಾವಧಿ ಚರ್ಚೆ

1) **ಶ್ರೀಯುತರುಗಳಾದ ಸಿದ್ದರಾಮಯ್ಯ, ಡಾ. ಅಜಯ್ ಧರ್ಮಸಿಂಗ್, ಪ್ರಿಯಾಂಕ ಖರ್ಗೆ, ಬಸನಗೌಡ ದದ್ದಲ್, ಜಿ.ಎನ್. ಗಣೇಶ್ ಹಾಗೂ ಇತರರು** – ಕಲ್ಯಾಣ ಕರ್ನಾಟಕದ ಶೈಕ್ಷಣಿಕ, ಸಾಮಾಜಿಕ, ಆರೋಗ್ಯ, ಆರ್ಥಿಕ ಹಾಗೂ ಇನ್ನಿತರೆ ಅಭಿವೃದ್ಧಿ ವಿಚಾರಗಳ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

2) **ಶ್ರೀಯುತರುಗಳಾದ ಸಿದ್ದರಾಮಯ್ಯ, ಕೆ.ಆರ್. ರಮೇಶ್ ಕುಮಾರ್, ಕೃಷ್ಣ ಬೈರೇಗೌಡ, ಡಿ.ಕೆ. ಶಿವಕುಮಾರ್, ಹೆಚ್.ಕೆ. ಪಾಟೀಲ್ ಹಾಗೂ ಡಾ. ಅಜಯ್ ಧರ್ಮಸಿಂಗ್** – ರಾಜ್ಯದಲ್ಲಿ ಇತ್ತೀಚೆಗೆ ಸಂಬಂಧಿಸಿದ ಕೋವಿಡ್-19ರ ಎರಡನೇ ಅಲೆಯಿಂದ ಅಪಾರ ಪ್ರಮಾಣದ ಸಾವು ನೋವುಗಳು ಸಂಭವಿಸಿದ್ದು, ಈ ಸಾಂಕ್ರಾಮಿಕ ಕಾಯಿಲೆಯಿಂದ ಮರಣ ಹೊಂದಿದ ಕುಟುಂಬ ಸದಸ್ಯರಿಗೆ ಪರಿಹಾರ ನೀಡುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

3) **ಶ್ರೀಯುತರುಗಳಾದ ಹೆಚ್.ಕೆ. ಕುಮಾರಸ್ವಾಮಿ, ಹೆಚ್.ಡಿ. ಕುಮಾರ ಸ್ವಾಮಿ, ಹೆಚ್.ಡಿ. ರೇವಣ್ಣ, ಸಿ.ಎಸ್. ಪುಟ್ಟರಾಜು, ಕೆ.ಎಸ್. ಲಿಂಗೇಶ್ ಹಾಗೂ ಇತರರು** – ರಾಜ್ಯದಲ್ಲಿ ಮುಂಗಾರಿನಲ್ಲಿ ಬಿದ್ದ ಮಳೆಯಿಂದಾಗಿ ರೈತರು ಬೆಳೆದ ಬೆಳೆಗಳಿಗೆ ಹಾಗೂ ಸಾರ್ವಜನಿಕ ಆಸ್ತಿ ಪಾಸ್ತಿಗಳಿಗೆ ಹಾನಿಯುಂಟಾಗಿರುವುದರಿಂದ ಪರಿಹಾರವನ್ನು ವಿತರಿಸುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

4) **ಶ್ರೀಯುತರುಗಳಾದ ಕೆ.ಎಂ. ಶಿವಲಿಂಗೇಗೌಡ, ಎಸ್.ಆರ್. ಶ್ರೀನಿವಾಸು (ವಾಸು), ಡಾ. ಹೆಚ್.ಡಿ. ರಂಗನಾಥ್, ಕೆ.ಎಸ್. ಲಿಂಗೇಶ್, ಗೂಳಿಹಟ್ಟಿ ಡಿ. ಶೇಖರ್, ಶ್ರೀಮತಿ ಕೆ. ಪೂರ್ಣಿಮ ಹಾಗೂ ಇತರರು** – ರಾಜ್ಯದಲ್ಲಿ ಕಾಡು ಗೊಲ್ಲ ಉಪ ಪಂಗಡಗಳನ್ನು ಪರಿಶಿಷ್ಟ ಪಂಗಡಕ್ಕೆ ಸೇರ್ಪಡೆಗೊಳಿಸುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

5) **ಶ್ರೀಯುತರುಗಳಾದ ಹೆಚ್.ಡಿ. ಕುಮಾರ ಸ್ವಾಮಿ, ಸಿ.ಎನ್. ಬಾಲಕೃಷ್ಣ, ಕೆ.ಎಸ್. ಲಿಂಗೇಶ್, ಹೆಚ್.ಡಿ. ರೇವಣ್ಣ, ಬಂಡಪ್ಪ ಖಾಶೆಂಪೂರ್, ಹಾಗೂ ಇತರರು** – ವಿವಿಧ ಇಲಾಖೆಗಳಲ್ಲಿ ಆರ್ಥಿಕ ಇಲಾಖೆಯ ಮಾನದಂಡಗಳನ್ನು ಉಲ್ಲಂಘಿಸಿ ಜೇಷ್ಠತೆಯನ್ನು ಪಾಲಿಸದೆ ಕೆಲವೇ ಗುತ್ತಿಗೆದಾರರಿಗೆ ಹಣ ಭರವಸೆ ಪತ್ರಗಳನ್ನು ನೀಡುತ್ತಿರುವುದರಿಂದ ಸಣ್ಣ ಗುತ್ತಿಗೆದಾರರು ತೀವ್ರ ಸಂಕಷ್ಟಕ್ಕೊಳಗಾಗಿರುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

6) **ಶ್ರೀಯುತರುಗಳಾದ ಸಿದ್ದರಾಮಯ್ಯ, ಕೆ.ಆರ್. ರಮೇಶ್ ಕುಮಾರ್, ಪ್ರಿಯಾಂಕ ಖರ್ಗೆ, ಕೃಷ್ಣ ಬೈರೇಗೌಡ, ಹೆಚ್.ಪಿ. ಮಂಜುನಾಥ್ ಹಾಗೂ ಇತರರು** – ರಾಜ್ಯ ಸರ್ಕಾರವು ಜೇಷ್ಠತೆ ಸಂರಕ್ಷಣಾ ಕಾಯ್ದೆ 2017ರ ಮೂಲಕ 1978ರಿಂದ ಎಲ್ಲಾ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಗಳ ಅಧಿಕಾರಿ/ನೌಕರರ ಜೇಷ್ಟತೆಯನ್ನು ಸಂರಕ್ಷಿಸಿದ್ದರೂ ಸಹ ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ ಸುತ್ತೋಲೆಯ ಮೂಲಕ ಜೇಷ್ಠತೆಗಳಿಗೆ ಭಂಗ ತರುತ್ತಿರುವ ಬಗ್ಗೆ ಪ್ರಸ್ತಾಪಿಸಲು ನೀಡಿರುವ ಸೂಚನೆಯ ಮೇಲೆ ಚರ್ಚೆ.

.. 3/ ..

## 6. ಗಮನ ಸೆಳೆಯುವ ಸೂಚನೆಗಳು

1) **ಶ್ರೀ ರಿಜ್ವಾನ್ ಅರ್ಷದ್ ಅವರು** – ಶಿವಾನಂದ ವೃತ್ತದಲ್ಲಿ ನಿರ್ಮಾಣ ಹಂತದಲ್ಲಿರುವ ಗ್ರೇಡ್ ಸಪರೇಟರ್ ಕಾಮಗಾರಿಯ ವಿಳಂಬದಿಂದ ಜನಸಾಮಾನ್ಯರಿಗೆ ಉಂಟಾಗುತ್ತಿರುವ ತೊಂದರೆಯ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

2) **ಶ್ರೀ ಎನ್.ಎ. ಹ್ಯಾರಿಸ್ ಅವರು** – ಬೆಂಗಳೂರು ನಗರ ವ್ಯಾಪ್ತಿಯ ಸಾರ್ವಜನಿಕ ಸ್ಥಳಗಳಲ್ಲಿ ವಾರಸುದಾರರಿಲ್ಲದ ವಾಹನಗಳ ನಿಲುಗಡೆಯಿಂದ ಉಂಟಾಗುತ್ತಿರುವ ಸಮಸ್ಯೆಗಳ ಬಗ್ಗೆ ಹಾಗೂ ಇಂತಹ ವಾಹನಗಳ ನಿರ್ವಹಣೆಗೆ ಸೂಕ್ತ ಕಾನೂನು ರೂಪಿಸುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

3) **ಶ್ರೀ ಎಲ್.ಎ. ರವಿಸುಬ್ರಮಣ್ಯ ಅವರು** – ಶ್ರೀ ಗುರು ರಾಘವೇಂದ್ರ ಸಹಕಾರಿ ಬ್ಯಾಂಕ್‌ನಲ್ಲಿ ನಡೆದಿರುವ ಅವ್ಯವಹಾರದಿಂದ ತೊಂದರೆಗೊಳಗಾಗಿರುವ ಠೇವಣಿದಾರರಿಗೆ ಠೇವಣಿ ಮೊತ್ತವನ್ನು ಬಡ್ಡಿ ಸಮೇತ ಕಾಲಬದ್ಧ ಸಮಯದಲ್ಲಿ ಹಿಂದಿರುಗಿಸಲು ಹಾಗೂ ಈ ಸಂಬಂಧದ ಆಡಿಟ್ ರಿಪೋರ್ಟ್‌ನ್ನು ಬಿಡುಗಡೆಗೊಳಿಸಲು ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ಸಹಕಾರ ಸಚಿವರ ಗಮನ ಸೆಳೆಯುವುದು.

4) **ಶ್ರೀ ಅಭಯ ಪಾಟೀಲ ಅವರು** – ಬೆಳಗಾವಿ ನಗರದಲ್ಲಿ ನಗರಾಭಿವೃದ್ಧಿ ಪ್ರಾಧಿಕಾರದಿಂದ ಏಕ ವಸತಿ ನಿವೇಶನಕ್ಕೆ ಅನುಮೋದನೆಯನ್ನು ಪಡೆದುಕೊಂಡು ನಗರ/ಗ್ರಾಮೀಣ ಭೂಮಾಪನ ಇಲಾಖೆಯಿಂದ ಕಾನೂನು ಬಾಹಿರವಾಗಿ ಮಾರಾಟ ಮಾಡಿರುವ ಬಗ್ಗೆ ತನಿಖೆ ನಡೆಸಲು ಹಾಗೂ ತಪ್ಪಿತಸ್ಥ ಅಧಿಕಾರಿಗಳ ವಿರುದ್ಧ ಕ್ರಮ ಕೈಗೊಳ್ಳುವ ಬಗ್ಗೆ ಮಾನ್ಯ ನಗರಾಭಿವೃದ್ಧಿ ಸಚಿವರ ಗಮನ ಸೆಳೆಯುವುದು.

5) **ಶ್ರೀ ರಾಮಲಿಂಗಾರೆಡ್ಡಿ ಅವರು** – ಪೊಲೀಸ್ ಸಿಬ್ಬಂದಿಗಳು ಸಂಚಾರ ಉಲ್ಲಂಘನೆ ಮಾಡಿದ ವಾಹನಗಳನ್ನು ತಡೆಗಟ್ಟುವ ಸಂದರ್ಭದಲ್ಲಿ ಅಪಘಾತವಾಗುತ್ತಿರುವ ಬಗ್ಗೆ ಹಾಗೂ ಬೆಂಗಳೂರು ನಗರದಲ್ಲಿ ಸಾರ್ವಜನಿಕರ ವಾಹನಗಳ ಟೋಯಿಂಗ್ ವಾಹನ ಹಾಗೂ ಸ್ಪಾಟ್ ಫೈನ್ ನೀತಿಯಿಂದ ಸಾರ್ವಜನಿಕರಿಗೆ ತೊಂದರೆಯಾಗುತ್ತಿರುವ ಬಗ್ಗೆ ಮಾನ್ಯ ಗೃಹ ಸಚಿವರ ಗಮನ ಸೆಳೆಯುವುದು.

6) **ಶ್ರೀ ಡಿ. ವೇದವ್ಯಾಸ ಕಾಮತ್ ಅವರು** – ಮಂಗಳೂರು ನಗರದಲ್ಲಿ ಕಾರ್ಯನಿರ್ವಹಿಸುತ್ತಿರುವ ಬ್ಯಾಟರಿ ಚಾಲಿತ ಆಟೋ ರಿಕ್ಷಾವನ್ನು ಆರ್.ಟಿ.ಓ. ವ್ಯಾಪ್ತಿಯಲ್ಲಿ ನೋಂದಣಿಗೆ ತಂದು ಸಾರ್ವಜನಿಕರಿಗೆ ಅನುಕೂಲ ಮಾಡಿಕೊಡುವ ಬಗ್ಗೆ ಮಾನ್ಯ ಸಾರಿಗೆ ಮತ್ತು ಪರಿಶಿಷ್ಟ ಕಲ್ಯಾಣ ಸಚಿವರ ಗಮನ ಸೆಳೆಯುವುದು.

7) **ಶ್ರೀ ಎಂ. ಕೃಷ್ಣಾರೆಡ್ಡಿ ಅವರು** – ಚಿಕ್ಕಬಳ್ಳಾಪುರ ಜಿಲ್ಲೆ, ಚಿಂತಾಮಣಿ ಸ್ಥಳೀಯ ಯೋಜನಾ ಪ್ರದೇಶಕ್ಕೆ ಪ್ರಸ್ತಾಪಿಸಲಾಗಿರುವ ಹೊರವರ್ತುಲ ಯೋಜನೆಯಲ್ಲಿ ಅವೈಜ್ಞಾನಿಕವಾದ ರಸ್ತೆಗಳ ನಿರ್ಮಾಣವನ್ನು ಪ್ರಸ್ತಾಪಿಸಿರುವುದರಿಂದ ರೈತರು, ನಿವೇಶನದಾರರು ಹಾಗೂ ಸ್ಥಳೀಯ ನಿವಾಸಿಗಳಿಗೆ ಅನಾನುಕೂಲವಾಗುತ್ತಿರುವ ಬಗ್ಗೆ ಮಾನ್ಯ ಮುಖ್ಯಮಂತ್ರಿಯವರ ಗಮನ ಸೆಳೆಯುವುದು.

.. 4/ ..

8) **ಶ್ರೀಯುತರುಗಳಾದ ಸಿದ್ದರಾಮಯ್ಯ, ಆರ್.ವಿ. ದೇಶಪಾಂಡೆ, ಹೆಚ್.ಕೆ. ಪಾಟೀಲ್, ಅಜಯ್ ಧರ್ಮಸಿಂಗ್, ಅವರು –** ರಾಜ್ಯದ ಕೆ.ಎಸ್.ಆರ್.ಟಿ.ಸಿ. ಮತ್ತು ಬಿ.ಎಂ.ಟಿ.ಸಿ. ಸಂಸ್ಥೆಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಿಬ್ಬಂದಿಗಳು ಆರನೇ ವೇತನ ಆಯೋಗದ ಶಿಫಾರಸ್ಸನ್ನು ಜಾರಿಗೊಳಿಸುವಂತೆ ಒತ್ತಾಯಿಸಿ ನಡೆಸಿದ ಧರಣಿಯ ಸಂದರ್ಭದಲ್ಲಿ ನೌಕರರನ್ನು ಅಮಾನತ್ತುಗೊಳಿಸಿ/ವಜಾಗೊಳಿಸುವ ಮೂಲಕ ಉಗ್ರ ಕ್ರಮ ತೆಗೆದುಕೊಂಡಿರುವ ಬಗ್ಗೆ ಮಾನ್ಯ ಸಾರಿಗೆ ಸಚಿವರ ಗಮನ ಸೆಳೆಯುವುದು.

9) **ಶ್ರೀ ಡಿ.ಕೆ. ಶಿವಕುಮಾರ್ ಅವರು –** ಸಮಗ್ರ ಶಿಶು ಅಭಿವೃದ್ಧಿ ಯೋಜನೆಯಲ್ಲಿ ದೀರ್ಘಾವಧಿ ಸೇವೆ ಸಲ್ಲಿಸಿರುವ ಹಾಗೂ ಕಡಿಮೆ ಅವಧಿ ಸೇವೆ ಸಲ್ಲಿಸಿದ ಕಾರ್ಯಕರ್ತೆಯರು ಮತ್ತು ಸಹಾಯಕಿಯರಿಗೆ ನೀಡುತ್ತಿರುವ ಗೌರವಧನ/ಪ್ರೋತ್ಸಾಹದಲ್ಲಿ ತಾರತಮ್ಯ ಉಂಟಾಗಿರುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರ ಗಮನ ಸೆಳೆಯುವುದು.

10) **ಶ್ರೀ ರಾಘವೇಂದ್ರ ಬಸವರಾಜ್ ಹಿಟ್ನಾಳ್ ಅವರು –** ಹೆಬ್ಬಾಳ ಕ್ಷೇತ್ರದ ಚೋಳನಾಯಕನಹಳ್ಳಿಯಲ್ಲಿರುವ ಸಬ್‌ರಿಜಿಸ್ಟ್ರಾರ್ ಕಛೇರಿಗೆ ಬರಲು ಸಾರ್ವಜನಿಕರಿಗೆ ಬಸ್ ಸೌಕರ್ಯ ಹಾಗೂ ಮೂಲಭೂತ ಸೌಕರ್ಯಗಳಿಲ್ಲದ ಕಾರಣ ಸದರಿ ಸಬ್ ರಿಜಿಸ್ಟ್ರಾರ್ ಕಛೇರಿಯನ್ನು ಆರ್.ಟಿ.ನಗರಕ್ಕೆ ಸ್ಥಳಾಂತರಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

11) **ಶ್ರೀ ಹೆಚ್.ಪಿ. ಮಂಜುನಾಥ್ ಮತ್ತು ಶ್ರೀ ಅನಿಲ್ ಚಿಕ್ಕಮಾದು ಅವರು –** ರಾಜ್ಯದ ಹಲವು ಅರಣ್ಯ ಪ್ರದೇಶಗಳನ್ನು ರಾಷ್ಟ್ರೀಯ ಉದ್ಯಾವನವೆಂದು ಘೋಷಣೆ ಮಾಡಿದ ನಂತರ ಅರಣ್ಯದಿಂದ ಹೊರಹಾಕಲ್ಪಟ್ಟ ಗಿರಿಜನರ ಪುನರ್ ವಸತಿಗಾಗಿ ರಚಿಸಲಾದ ಮುಜಾಫರ್ ಆಸಾದಿ ಸಮಿತಿಯ ವರದಿಯನ್ನು ಜಾರಿಗೊಳಿಸುವ ಬಗ್ಗೆ ಮಾನ್ಯ ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

12) **ಡಾ. ಹೆಚ್.ಡಿ. ರಂಗನಾಥ್ ಅವರು –** ರಾಜ್ಯದಲ್ಲಿ ದಿನಗೂಲಿ ಆಧಾರದಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮ ಸಹಾಯಕರನ್ನು ಖಾಯಂಗೊಳಿಸಿ, ಸೇವಾ ಭದ್ರತೆ ಒದಗಿಸುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

13) **ಶ್ರೀ ಸಿ.ಎಸ್. ನಿರಂಜನ್ ಕುಮಾರ್ ಅವರು –** ಗುಂಡ್ಲುಪೇಟೆ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಕಗ್ಗಳದಹುಂಡಿ ಹತ್ತಿರ ಚೇನಾ ಮೂಲದ ಕಂಪನಿಯು ಸ್ಥಾಪಿಸಿರುವ ಚಂಡು ಹೂವು ಸಂಸ್ಕರಣ ಘಟಕದ ವಾಸನೆಯಿಂದ ಗ್ರಾಮಸ್ಥರು ಅನಾರೋಗ್ಯಕ್ಕೆ ತುತ್ತಾಗಿರುವ ಬಗ್ಗೆ ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕಾ ಸಚಿವರ ಗಮನ ಸೆಳೆಯುವುದು.

14) **ಶ್ರೀ ಸಂಜೀವ್ ಮಠಂದೂರು ಅವರು –** ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ರೈತರ ಖದಿಂ ವರ್ಗ ಭೂಮಿಯು ತರಿ, ಭಾಗಾಯ್ತು, ಪುಂಜ ಭೂಮಿಯು ಒಂದು ಎಕರೆಗೆ ಎರಡು ಎಕರೆ ಭೂಮಿಯನ್ನಾಗಿ ಪರಿವರ್ತನೆ ಮಾಡುವುದರಿಂದ ಸಣ್ಣ ರೈತರು ಸರ್ಕಾರಿ ಸೌಲಭ್ಯಗಳಿಂದ ವಂಚಿತರಾಗುತ್ತಿರುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

15) **ಶ್ರೀ ಎಲ್. ನಾಗೇಂದ್ರ ಅವರು –** ಮೈಸೂರು ನಗರದಲ್ಲಿ ನಿರ್ಮಾಣಗೊಳ್ಳುತ್ತಿರುವ ಅಂಬೇಡ್ಕರ್ ಭವನದ ಕಾಮಗಾರಿಯನ್ನು ಶಿಘ್ರವಾಗಿ ಪೂರ್ಣಗೊಳಿಸುವ ಬಗ್ಗೆ ಮಾನ್ಯ ಸಮಾಜ ಕಲ್ಯಾಣ ಹಾಗೂ ಹಿಂದುಳಿದ ವರ್ಗಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

16) **ಶ್ರೀ ಮಹಾದೇವಪ್ಪ ಶಿವಲಿಂಗಪ್ಪ ಯಾದವಾಡ ಅವರು** – ಬೆಳಗಾವಿ ಜಿಲ್ಲೆಯ ಕಟಕೋಳ ಪೊಲೀಸ್ ಠಾಣೆಯಲ್ಲಿ ದಾಖಲಾಗಿರುವ ಪ್ರಕರಣಗಳು ಇತ್ಯರ್ಥವಾಗುವವರೆಗೆ ರಾಮದುರ್ಗ ತಾಲ್ಲೂಕಿನ ಉದಪುಡಿ ಗ್ರಾಮದ ಶ್ರೀ ಶಿವಸಾಗರ್ ಸಕ್ಕರೆ ಕಾರ್ಖಾನೆಯ ಸಂಪೂರ್ಣ ಆಸ್ತಿಯನ್ನು ಮುಟ್ಟುಗೋಲು ಹಾಕಿಕೊಳ್ಳುವ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

17) **ಶ್ರೀ ಅನಿಲ್ ಚಿಕ್ಕಮಾದು ಅವರು** – ನಾಯಕ ಜಾತಿಯ ಪರ್ಯಾಯ ಪದವಾದ ಪರಿವಾರವನ್ನು ಪರಿಶಿಷ್ಟ ಪಂಗಡದ ಪಟ್ಟಿ ಕ್ರ.ಸಂ.38ಕ್ಕೆ ಸೇರಿಸಿದ್ದರೂ ಸಹ ಹಳೆ ಮೈಸೂರು ಪ್ರಾಂತ್ಯದಲ್ಲಿ ನಾಯಕ ಸಮಾಜದವರಿಗೆ ಜಾತಿ ಪ್ರಮಾಣ ಪತ್ರ, ಸಿಂಧುತ್ವ ಪ್ರಮಾಣ ಪತ್ರ ನೀಡುವ ಸಂದರ್ಭದಲ್ಲಿ ಉಂಟಾಗಿರುವ ಗೊಂದಲಗಳ ಬಗ್ಗೆ ಮಾನ್ಯ ಸಾರಿಗೆ ಹಾಗೂ ಪರಿಶಿಷ್ಟ ಪಂಗಡಗಳ ಕಲ್ಯಾಣ ಸಚಿವರ ಗಮನ ಸೆಳೆಯುವುದು.

18) **ಶ್ರೀ ರವೀಂದ್ರ ಶ್ರೀಕಂಠಯ್ಯ ಅವರು** – ಮಂಡ್ಯ ಜಿಲ್ಲೆಯ ಸುತ್ತಮುತ್ತಲಿನ ಜನರು ಮನೆಗಳನ್ನು ನಿರ್ಮಿಸಲು ಕಲ್ಲು ಹಾಗೂ ಜಲ್ಲಿ ಕಲ್ಲಿನ ಅವಶ್ಯಕತೆ ಇರುವುದರಿಂದ ಜಿಲ್ಲೆಯಲ್ಲಿ ಸ್ಥಗಿತಗೊಳಿಸಿರುವ ಕಲ್ಲು ಗಣಿಗಾರಿಕೆಯನ್ನು ಪುನರ್ ಪ್ರಾರಂಭಿಸಿ ಸಾರ್ವಜನಿಕರಿಗೆ ಅನುಕೂಲಮಾಡಿಕೊಡುವ ಬಗ್ಗೆ ಮಾನ್ಯ ಗಣಿ ಮತ್ತು ಭೂ ವಿಜ್ಞಾನ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ, ವಿಕಲಚೇತನರ ಮತ್ತು ಹಿರಿಯ ನಾಗರೀಕರ ಸಬಲೀಕರಣ ಸಚಿವರ ಗಮನ ಸೆಳೆಯುವುದು.

19) **ಶ್ರೀ ಸಿ.ಎಂ. ನಿಂಬಣ್ಣವರ್ ಅವರು** – ಕಲಘಟಗಿ ತಾಲ್ಲೂಕಿನ ಜಿನ್ನೂರ ಮತ್ತು ಧಾರವಾಡ ತಾಲ್ಲೂಕಿನ ಮುಮ್ಮಿಗಟ್ಟಿ ಗ್ರಾಮದಲ್ಲಿ ಆರ್.ಎಂ.ಎಸ್. ಯೋಜನೆಯಡಿ ಮಂಜೂರಾಗಿರುವ ಪ್ರೌಢಶಾಲೆಗಳಿಗೆ ಸ್ವಂತ ಕಟ್ಟಡ ನಿರ್ಮಾಣ ಮಾಡಲು ಅನುದಾನ ಬಿಡುಗಡೆ ಮಾಡುವ ಬಗ್ಗೆ ಮಾನ್ಯ ಪ್ರಾಥಮಿಕ ಮತ್ತು ಪ್ರೌಢ ಶಿಕ್ಷಣ ಹಾಗೂ ಸಕಾಲ ಸಚಿವರ ಗಮನ ಸೆಳೆಯುವುದು.

20) **ಡಾ. ಭರತ್ ಶೆಟ್ಟಿ ವೈ. ಅವರು** – ದಕ್ಷಿಣ ಕನ್ನಡ ಜಿಲ್ಲೆ ವ್ಯಾಪ್ತಿಯಲ್ಲಿ ಬಿ.ಪಿ.ಎಲ್ ಪಡಿತರ ಚೀಟಿ ಹೊಂದಿರುವ ಸ್ಥಿತಿವಂತರ ಕುಟುಂಬಗಳು ಸಾಕಷ್ಟು ಸವಲತ್ತುಗಳನ್ನು ಪಡೆದುಕೊಳ್ಳುತ್ತಿರುವುದನ್ನು ಪರಿಗಣಿಸಿ ಬಿ.ಪಿ.ಎಲ್ ಪಡಿತರ ಚೀಟಿಯನ್ನು ರದ್ದುಪಡಿಸಿರುವುದರಿಂದ ನೈಜ ಅರ್ಹ ಫಲಾನುಭವಿಗಳು ಪಡಿತರ ಸೌಲಭ್ಯ, ಆರೋಗ್ಯ ಸೌಲಭ್ಯಗಳಿಂದ ವಂಚಿತರಾಗುತ್ತಿರುವ ಬಗ್ಗೆ ಮಾನ್ಯ ಅರಣ್ಯ ಹಾಗೂ ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವರ ಗಮನ ಸೆಳೆಯುವುದು.

21) **ಶ್ರೀ ಬಸವರಾಜ್ ದಡೇಸಗೂರ್ ಅವರು** – ಕೊಪ್ಪಳ ಜಿಲ್ಲೆ ವ್ಯಾಪ್ತಿಯ ವಿವಿಧ ತಾಲ್ಲೂಕುಗಳಲ್ಲಿ ಮಳೆ ಬಾರದೆ ಬೆಳೆಗಳು ಹಾಳಾಗುತ್ತಿರುವುದರಿಂದ ಪಂಪ್‌ಸೆಟ್‌ಗಳು ಹಾಗೂ ಕೊಳವೆ ಬಾವಿಗಳ ಮೂಲಕ ರೈತರ ಜಮೀನುಗಳಿಗೆ ನೀರುಣಿಸಲು ಅನುಕೂಲವಾಗುವಂತೆ ಹನ್ನೆರಡು ಗಂಟೆಯವರೆಗೆ ವಿದ್ಯುತ್ ಸರಬರಾಜನ್ನು ವಿಸ್ತರಿಸುವ ಬಗ್ಗೆ ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರ ಗಮನ ಸೆಳೆಯುವುದು.

.. 6/ ..

22) **ಶ್ರೀ ಸಾ.ರಾ. ಮಹೇಶ್ ಅವರು** – ಕೆ.ಆರ್. ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಚುಂಚನಕಟ್ಟೆಯ ಸುತ್ತಮುತ್ತಲಿನ ರೈತರು ಬೆಳೆದ ಕಬ್ಬಿಗೆ ಸರ್ಕಾರಿ ಕಾರ್ಖಾನೆಯ ಅಭಾವವಿರುವುದರಿಂದ ಸ್ಥಗಿತಗೊಂಡಿರುವ ಶ್ರೀರಾಮ ಸಕ್ಕರೆ ಕಾರ್ಖಾನೆಯನ್ನು ಕೂಡಲೇ ಪ್ರಾರಂಭಿಸುವ ಬಗ್ಗೆ ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಸಕ್ಕರೆ ಸಚಿವರ ಗಮನ ಸೆಳೆಯುವುದು.

23) **ಶ್ರೀಮತಿ ಲಕ್ಷ್ಮೀ ಆರ್. ಹೆಬ್ಬಾಳಕರ್ ಅವರು** – ಬೆಳಗಾವಿ ಗ್ರಾಮೀಣ ಮತಕ್ಷೇತ್ರ ವ್ಯಾಪ್ತಿಯ ಮೋದಗಾ ಗ್ರಾಮದ ಶ್ರೀ ಮಾರುತಿ ದೇವಸ್ಥಾನಕ್ಕೆ ಸಂಬಂಧಿಸಿದ ಹೊನ್ನಿಹಾಳ ಗ್ರಾಮದ ಜಮೀನನ್ನು ಕಾನೂನು ಉಲ್ಲಂಘಿಸಿ, ಖಾಸಗಿ ವ್ಯಕ್ತಿಗಳ ಹೆಸರನ್ನು ಪಹಣಿಯಲ್ಲಿ ನಮೂದಿಸಿ ಭೂಪರಿವರ್ತನೆ ಮಾಡಿರುವ ವಿಷಯದ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

24) **ಶ್ರೀ ಈ. ತುಕಾರಾಮ್ ಅವರು** – ಸಂಡೂರು ಸಂಸ್ಥಾನದಿಂದ ಸೇರ್ಪಡೆಯಾದ ಹದಿನಾಲ್ಕು ಗ್ರಾಮಗಳ ಇನಾಂ ಜಮೀನುಗಳಿಗೆ ಸರ್ವೆ ಸೆಟಲ್‌ಮೆಂಟ್ ಆಗದೆ ಇರುವುದರಿಂದ ಇನ್ನೂ ಪೈಮಾಸಿ ನಂಬರುಗಳಲ್ಲೆ ಮುಂದುವರೆದಿರುವುದರಿಂದ ರೈತರಿಗೆ ಉಂಟಾಗಿರುವ ಸಮಸ್ಯೆಗಳ ಬಗ್ಗೆ ಮಾನ್ಯ ಕಂದಾಯ ಸಚಿವರ ಗಮನ ಸೆಳೆಯುವುದು.

## 7. ಅರ್ಧ ಗಂಟೆ ಕಾಲಾವಧಿ ಚರ್ಚೆ

1) **ಶ್ರೀ ಜೆ.ಎನ್. ಗಣೇಶ್ ಅವರು** – ಕಂಪ್ಲಿ ನಗರದಲ್ಲಿರುವ ಸಕ್ಕರೆ ಕಾರ್ಖಾನೆಯ ಕಾರ್ಯಾಚರಣೆ ಸ್ಥಗಿತಗೊಂಡಿರುವ ಬಗ್ಗೆ ದಿನಾಂಕ: 17.09.2021ರಂದು ಐದನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 65(871)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

2) **ಶ್ರೀ ಎ.ಟಿ. ರಾಮಸ್ವಾಮಿ ಅವರು** – ಭಾರಿ ಪ್ರಮಾಣದ ಸರ್ಕಾರಿ ಜಮೀನುಗಳು ಸುಳ್ಳು ದಾಖಲೆಗಳ ಮೂಲಕ ಭೂಗಳ್ಳರ ಪಾಲಾಗುತ್ತಿರುವ ಬಗ್ಗೆ ದಿನಾಂಕ: 15.09.2021ರ ಗಮನ ಸೆಳೆಯುವ ಸೂಚನೆಗೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

3) **ಶ್ರೀ ಜೆ.ಎನ್. ಗಣೇಶ್ ಅವರು** – ಪರಿಶಿಷ್ಟ ಪಂಗಡಕ್ಕೆ ಮೀಸಲಾತಿಯನ್ನು ಘೋಷಣೆ ಮಾಡುವುದಕ್ಕೆ ಸಂಬಂಧಿಸಿದಂತೆ ನಿವೃತ್ತ ನ್ಯಾಯಮೂರ್ತಿ ನೇತೃತ್ವದ ತ್ರಿಸದಸ್ಯ ಸಮಿತಿ ರಚನೆ ಮಾಡಿರುವ ಬಗ್ಗೆ ದಿನಾಂಕ: 15.09.2021ರ ಗಮನ ಸೆಳೆಯುವ ಸೂಚನೆಗೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

4) **ಶ್ರೀ ಶರತ್ ಕುಮಾರ್ ಬಚ್ಚೇಗೌಡ ಅವರು** – "ಪ್ರಧಾನ ಮಂತ್ರಿ ಅವಾಸ್ ಯೋಜನೆ"ಯ ಬಗ್ಗೆ ದಿನಾಂಕ: 20.09.2021ರ ಆರನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 85(1507)ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ ಅರ್ಧ ಗಂಟೆ ಕಾಲ ಚರ್ಚಿಸುವುದು.

.. 7/ ..

5) **ಶ್ರೀ ಶಿವಾನಂದ ಎಸ್. ಪಾಟೀಲ್ ಅವರು – "**ಲಾಲ್ ಬಹದ್ದೂರ್ ಶಾಸ್ತ್ರಿ ಅಣೆಕಟ್ಟು ಎತ್ತರ**"** ಎಂಬ ವಿಷಯದ ಬಗ್ಗೆ ದಿನಾಂಕ:21.09.2021ರ ಏಳನೇ ಪಟ್ಟಿಯಲ್ಲಿನ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 92(2003) ಕ್ಕೆ ಒದಗಿಸಿರುವ ಉತ್ತರಕ್ಕೆ ಸಂಬಂಧಿಸಿದಂತೆ

ಹಾಗೂ

**ಶ್ರೀಯುತರುಗಳಾದ ಶ್ರೀ ಯಶವಂತರಾಯಗೌಡ ವಿಠ್ಠಲಗೌಡ ಪಾಟೀಲ್, ಅಮರೇಗೌಡ ಎಲ್. ಪಾಟೀಲ್ ಬಯ್ಯಾಪುರ, ಎ.ಎಸ್. ಪಾಟೀಲ್ (ನಡಹಳ್ಳಿ), ಮಹಾಂತೇಶ್ ಕೌಜಲಗಿ, ಸಿದ್ದು ಸವದಿ ಹಾಗೂ ಇತರರು** ಇದೇ ವಿಷಯಕ್ಕೆ ಸಂಬಂಧಿಸಿದಂತೆ ನೀಡಿರುವ ಸೂಚನೆ ಮೇಲೆ ಅರ್ಧ ಗಂಟೆ ಕಾಲ ಚರ್ಚಿಸುವುದು.

**ಎಂ.ಕೆ. ವಿಶಾಲಾಕ್ಷಿ**
**ಕಾರ್ಯದರ್ಶಿ(ಪ್ರ)**

**ವಿಧಾನಸಭೆಯ ಕಾರ್ಯಕಲಾಪಗಳ ಪಟ್ಟಿಯನ್ನು ವೆಬ್‌ಸೈಟ್‌ನಲ್ಲಿಯೂ ಸಹ ಪಡೆದುಕೊಳ್ಳಬಹುದು.**
http://kla.kar.nic.in/assembly/lob/lob.htm